# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ – I | ಬೆಂಗಳೂರು, ಶುಕ್ರವಾರ, ಏಪ್ರಿಲ್ ೧೧, ೨೦೧೪ (ಚೈತ್ರ ೨೧, ಶಕ ವರ್ಷ ೧೯೩೬) | ನಂ. ೨೬೫ |
|---|---|---|
| Part – I | Bangalore, Friday, April 11, 2014 (Chaithra 21, Shaka Varsha 1936) | No. 265 |


### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಮಾನವ ಸಂಪನ್ಮೂಲ ನಿರ್ವಹಣಾ ವ್ಯವಸ್ಥೆ ಜಾರಿಗೊಳಿಸಲು ಅನುಸರಿಸಬೇಕಾದ ಪ್ರಕ್ರಿಯೆ.

**ಓದಲಾಗಿದೆ:**
(1) ದಿನಾಂಕ: 30.03.2005ರ ಆದೇಶ ಸಂಖ್ಯೆ: ಆ ಇ 8 ಜಿ ಐ ಇ 2003.
(2) ದಿನಾಂಕ: 07.07.2006ರ ಸರ್ಕಾರಿ ಆದೇಶ ಸಂಖ್ಯೆ: ಆ ಇ 37 ಪಿ ಎಂ ಯು 2006.
(3) ದಿನಾಂಕ:14.11.2006ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 25 ವಿಮಾಆ 2006 (ಭಾಗ-2).
(4) ದಿನಾಂಕ:21.07.2007 ಮತ್ತು 02.08.2007ರ ಪತ್ರ ಸಂ: ಸಿಆಸುಇ 25 ವಿಮಾಆ 2006.
(5) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಇ-ಆಡಳಿತ) ಇವರು ಸರ್ಕಾರದ ಕಾರ್ಯದರ್ಶಿ, ಸಿಆಸುಇ ಇವರಿಗೆ ಉದ್ದೇಶಿಸಿದ ದಿನಾಂಕ:17.07.2009ರ ಅ.ಸ.ಪತ್ರ ಸಂಖ್ಯೆ: ಸಿಆಸುಇ 14 ವಿಮಾಆ 2009.
(6) ದಿನಾಂಕ: 21.05.2011ರ ಪತ್ರ ಸಂಖ್ಯೆ: ಆ ಇ 6 ಎಟಿಇ 2011.
(7) ದಿನಾಂಕ:10.10.2011 ಹಾಗೂ 16.07.2012ರ ಸರ್ಕಾರಿ ಆದೇಶ ಸಂಖ್ಯೆ: ಆಇ 49 ಟಿಎಆರ್ 2011
(8) ದಿನಾಂಕ:15.10.2011ರ ಪತ್ರ ಸಂಖ್ಯೆ: ಸಿಇಜಿ 4 ಹೆಚ್‌ಆರ್ ಎಂಎಸ್ 2009.
(9) ದಿನಾಂಕ: 25.10.2012ರ ಸರ್ಕಾರಿ ಆದೇಶ ಸಂಖ್ಯೆ: ಆಇ 48 ಟಿಎಆರ್ 2012.
(10) ದಿನಾಂಕ: 04.05.2013ರ ಪತ್ರ ಸಂಖ್ಯೆ: ಸಿಇಜಿ 4 ಹೆಚ್‌ಆರ್ ಎಂಎಸ್ 2009.

**ಪ್ರಸ್ತಾವನೆ:**

1. ಮೇಲೆ (1) ರಲ್ಲಿ ಓದಲಾದ ದಿನಾಂಕ: 30.03.2005ರ ಸರ್ಕಾರಿ ಆದೇಶದನ್ವಯ ಮಾನವ ಸಂಪನ್ಮೂಲ ನಿರ್ವಹಣಾ ವ್ಯವಸ್ಥೆಯನ್ನು ಜಾರಿಗೊಳಿಸುವ ಸಲುವಾಗಿ ಮೆ: ಸಿಎಂಸಿ ಸಂಸ್ಥೆಯನ್ನು ಸಮಾಲೋಚಕರನ್ನಾಗಿ ನೇಮಕ ಮಾಡಲಾಯಿತು. ಹೆಚ್‌ಆರ್ ಎಂಎಸ್ ನ ಉದ್ದೇಶವು ಈ ಕೆಳಕಂಡ ಮುಖ್ಯ ಕಾರ್ಯ ಚಟುವಟಿಕೆಗಳ ಬಗ್ಗೆ ಕ್ರಮ ತೆಗೆದುಕೊಳ್ಳುವುದಾಗಿತ್ತು. ಅವುಗಳೆಂದರೆ, ಸೇವಾ ದಾಖಲೆಗಳ ನಿರ್ವಹಣೆ, ಸಂಬಳ ಬಿಲ್ಲುಗಳ ತಯಾರಿಕೆ, ಬಡ್ತಿ, ವರ್ಗಾವಣೆ ಮತ್ತು ನೌಕರರ ಆಯವ್ಯಯ, ಸಂಬಳ ಬಿಲ್ಲುಗಳ ತಂತ್ರಾಂಶ ಮಾದರಿಯು ತಂತಾನೆ ಸಂಬಳ ತಯಾರಿಕೆಯಲ್ಲಿ ನೌಕರರ ಹಾಜರಾತಿ, ವಿವಿಧ ಮುರಿಕೆಗಳ (deductions) ಲೆಕ್ಕಾಚಾರ, ತೆರಿಗೆ ಇತ್ಯಾದಿಗಳ ದತ್ತಾಂಶಗಳನ್ನು ಒಟ್ಟುಗೂಡಿಸುವುದು, ಕಾಲಿಕ ಸಂಬಳ ಬಿಲ್ಲುಗಳನ್ನು ಮತ್ತು ನೌಕರರ ತೆರಿಗೆ ಕುರಿತಾದ ವರದಿಗಳನ್ನು ಸಿದ್ಧಪಡಿಸುವುದು, ಆ ನಂತರ ಸಂಬಳದ ಈ ಬಿಲ್ಲುಗಳನ್ನು ಪಾವತಿಗಾಗಿ ಖಜಾನೆಗೆ ಹಾಜರುಪಡಿಸುವುದು, ಸೇವಾ ದಾಖಲೆ ನಿರ್ವಹಣೆ ಮಾದರಿಯ ಮಾನವ ಸಂಪನ್ಮೂಲದ ಇತರೆ ಎಲ್ಲಾ ಸಾಧಕಗಳನ್ನು (Components) ತನ್ನ ವ್ಯಾಪ್ತಿಯಲ್ಲಿ ಒಳಗೊಂಡಿರುತ್ತದೆ ಮತ್ತು ನೌಕರರು ಸೇವೆಗೆ ಸೇರಿದ

ದಿನಾಂಕ, ತರಬೇತಿ, ಅಭಿವೃದ್ಧಿ ಸಾಮರ್ಥ್ಯ, ದಾಖಲೆಗಳ ನಿರ್ವಹಣೆಯಲ್ಲಿ ನೈಪುಣ್ಯತೆ ಮತ್ತು ನೌಕರರ ಸಂಬಂಧಿತ ಇತರೆ ಚಟುವಟಿಕೆಗಳನ್ನು ದಾಖಲಿಸುತ್ತದೆ.

2. ಮೇಲೆ (2)ರಲ್ಲಿ ಓದಲಾದ ದಿನಾಂಕ:07.07.2006ರ ಸರ್ಕಾರಿ ಆದೇಶದನ್ವಯ ಹೆಚ್.ಆರ್.ಎಂ.ಎಸ್. ಯೋಜನೆಯನ್ನು ಆರ್ಥಿಕ ಇಲಾಖೆಯಿಂದ ಸಿಆಸುಇ(ಇ-ಆಡಳಿತ)ಗೆ ವರ್ಗಾಯಿಸಲಾಯಿತು.

3. ಮೇಲೆ (3) ರಲ್ಲಿ ಓದಲಾದ ದಿನಾಂಕ: 14.11.2006ರ ಸರ್ಕಾರಿ ಆದೇಶದನ್ವಯ ಸರ್ಕಾರವು ಇ–ಆಡಳಿತ ಕೇಂದ್ರವನ್ನು ಹೆಚ್.ಆರ್.ಎಂ.ಎಸ್. ಯೋಜನೆಯನ್ನು ಜಾರಿಗೊಳಿಸುವ ಏಜೆನ್ಸಿಯನ್ನಾಗಿ ಪದನಾಮಿಕರಿಸಲು ಸರ್ಕಾರದ ಮಂಜೂರಾತಿ ನೀಡಲಾಯಿತು.

4. ಹೆಚ್.ಆರ್.ಎಂ.ಎಸ್. ಸಾಫ್ಟವೇರ್ ಅನ್ನು ಬಳಸಿ ಸಂಬಳದ ಬಿಲ್ಲುಗಳನ್ನು ವಿದ್ಯುನ್ಮಾನ ತಂತ್ರಾಂಶದ ಮೂಲಕ ಸಲ್ಲಿಸುವ ಅನಿವಾರ್ಯತೆಯನ್ನು ನಮೂದಿಸುತ್ತಾ, ಎಲ್ಲಾ ಇಲಾಖಾ ಮುಖ್ಯಸ್ಥರುಗಳಿಗೆ ಜಿಲ್ಲಾ ಕೇಂದ್ರ ಸ್ಥಾನ ಹಾಗೂ ತಾಲ್ಲೂಕುಗಳ ಕ್ಷೇತ್ರ ಕಚೇರಿಗಳ ಸಂಪರ್ಕ ಸಾಧಿಸುವ ಸಲುವಾಗಿ ಸಂಪರ್ಕಾಧಿಕಾರಿಯನ್ನು ನಾಮ ನಿರ್ದೇಶನಗೊಳಿಸಲು ಮೇಲೆ (4) ರಲ್ಲಿ ಓದಲಾದ ದಿನಾಂಕ: 21.07.2007 ಮತ್ತು 02.08.2007 ರ ಸರ್ಕಾರದ ಪತ್ರಗಳನ್ವಯ ಸೂಚಿಸಲಾಯಿತು. ಈ ಸೂಚನೆಗಳ ಮೂಲಕ, ಹೆಚ್.ಆರ್.ಎಂ.ಎಸ್.ಅನ್ನು ಜಾರಿಗೊಳಿಸುವುದು ಕಡ್ಡಾಯವಾಗಿರುವುದೆಂದು ಸ್ಪಷ್ಟಪಡಿಸಲಾಯಿತು. ಕ್ಷೇತ್ರ ಇಲಾಖೆಗಳು ದತ್ತಾಂಶವನ್ನು ಸರಿಯಾಗಿ ಅಳವಡಿಸದೆ ಸಂಬಳ ವಿತರಣೆಯು ವಿಳಂಬವಾದಲ್ಲಿ, ಇಂತಹ ವಿಳಂಬಕ್ಕೆ ಸಂಬಂಧಿತ ಇಲಾಖಾ ಮುಖ್ಯಸ್ಥರೇ ಜವಾಬ್ದಾರರಾಗುತ್ತಾರೆಂದು ಸಹ ಸ್ಪಷ್ಟಪಡಿಸಲಾಯಿತು.

5. ಹೆಚ್.ಆರ್.ಎಂ.ಎಸ್.ನಲ್ಲಿ ಅಳವಡಿಸುವ ಸಲುವಾಗಿ ಅವರ ಅಧೀನದಲ್ಲಿರುವ ನೌಕರರ ಸೇವಾ ವಿವರಗಳನ್ನು ಒದಗಿಸುವಂತೆ ಎಲ್ಲಾ ಇಲಾಖಾ ಮುಖ್ಯಸ್ಥರುಗಳಿಗೆ ತಿಳಿಸಿ, ಅವರುಗಳಿಗೆ ಸೂಚನೆಗಳನ್ನು ಹೊರಡಿಸುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಕಾರ್ಯದರ್ಶಿಯವರನ್ನು ಮೇಲೆ (5)ರಲ್ಲಿ ಓದಲಾದ ದಿನಾಂಕ: 17.07.2009ರ ಸರ್ಕಾರಿ ಪತ್ರದನ್ವಯ ಕೋರಲಾಯಿತು.

6. ಹೆಚ್.ಆರ್.ಎಂ.ಎಸ್. ವ್ಯವಸ್ಥೆಯಲ್ಲಿ ಸಂಬಳಕ್ಕೆ ಸಂಬಂಧಿಸಿದ 12 ಅಂಕಿಗಳ ಲೆಕ್ಕ ಶೀರ್ಷಿಕೆಯನ್ನು ಮಾತ್ರ ಅಳವಡಿಸುವ ಸಾಧ್ಯತೆ ಇದೆಯೆಂದು ಸ್ಪಷ್ಟೀಕರಿಸುತ್ತಾ, ಸಂಬಳೇತರ ಬಿಲ್ಲುಗಳನ್ನು ಕೈ ಬರಹದ ಮೂಲಕ ತಯಾರಿಸಿ ಖಜಾನೆಗೆ ಸಲ್ಲಿಸಬಹುದೆಂದು ಮೇಲೆ (6)ರಲ್ಲಿ ಓದಲಾದ ದಿನಾಂಕ: 21.05.2011ರ ಸರ್ಕಾರಿ ಪತ್ರದನ್ವಯ ಸೂಚಿಸಲಾಯಿತು.

7. ಸರ್ಕಾರದ ಇಲಾಖೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ಸಿಬ್ಬಂದಿಯವರು ರಾಜ್ಯವಲಯದಿಂದ ಜಿಲ್ಲಾ ವಲಯಕ್ಕೆ (ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್ ಮತ್ತು ಗ್ರಾಮ ಪಂಚಾಯತ್) ಮತ್ತು ಹಿಂದಕ್ಕೆ ವರ್ಗಾವಣೆಯಾದ ಸಂದರ್ಭಗಳಲ್ಲಿ ಸಂಬಳದ ಬಾಕಿ ಮತ್ತು ಭಾಗಶ: ತಿಂಗಳಿಗೆ ಲಭ್ಯವಾಗುವ ಸಂಬಳದ ಬಾಕಿಯನ್ನು ಸರ್ಕಾರಿ ನೌಕರನನ್ನು ವರ್ಗಾವಣೆಗೊಂಡ ಎಸ್ಟಾಬ್ಲಿಷ್‌ಮೆಂಟ್ ನಿಂದ ಸೆಳೆಯಬಹುದೆಂಬ ಸ್ಪಷ್ಟೀಕರಣದ ಮೇಲೆ (7)ರಲ್ಲಿ ಓದಲಾದ ದಿನಾಂಕ:10.10.2011ರ ಆದೇಶದನ್ವಯ ನೀಡಲಾಯಿತು.

8., ಸ್ವಾಯತ್ತ ಸಂಸ್ಥೆಯಂತಹ ಮಂಡಳಿ ಮತ್ತು ನಿಗಮಗಳಲ್ಲಿ ಅನ್ಯ ಸೇವೆಯ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಸರ್ಕಾರಿ ನೌಕರರ/ ನಿವೃತ್ತ ಸರ್ಕಾರಿ ನೌಕರರ ಸಂಬಳದ ಬಾಕಿಯನ್ನು ಸೆಳೆಯುವ ಪ್ರಕ್ರಿಯೆಯನ್ನು ಮೇಲೆ (7)ರಲ್ಲಿ ಓದಲಾದ ದಿನಾಂಕ:16.07.2012 ರ ಸರ್ಕಾರಿ ಆದೇಶದನ್ವಯ ವಿವರಿಸಲಾಗಿದೆ.

9. ಕೈಬರಹದಲ್ಲಿ ತಯಾರಿಸಿದ ಯಾವುದೇ ಸಂಬಳ ಬಿಲ್ಲುಗಳನ್ನು ಇ-ಆಡಳಿತ ಕೋಶದಿಂದ ಅಧಿಕೃತ ಗೊಳಿಸಿಕೊಳ್ಳದಿದ್ದಲ್ಲಿ, ಅವನ್ನು ಒಪ್ಪಿಕೊಳ್ಳಬಾರದೆಂದು ಎಲ್ಲಾ ಖಜಾನೆಗಳಿಗೆ ಮೇಲೆ (8)ರಲ್ಲಿ ಓದಲಾದ ದಿನಾಂಕ:15.10.2011ರ ಸರ್ಕಾರಿ ಪತ್ರದನ್ವಯ ಸೂಚನೆಗಳನ್ನು ನೀಡಲಾಗಿದೆ.

10. ಈಗಾಗಲೇ ಸೇವೆಯಿಂದ ನಿವೃತ್ತರಾಗಿರುವ ಸರ್ಕಾರಿ ನೌಕರರ ಪ್ರಕರಣಗಳಲ್ಲಿ, ಅವರು ಹೆಚ್.ಆರ್.ಎಂ.ಎಸ್. ವ್ಯವಸ್ಥೆಯ ಅಳವಡಿಕೆಯ ಪೂರ್ವದಲ್ಲಿ ಅಥವಾ ಆ ನಂತರ ರಾಜ್ಯ ವಲಯ ಅಥವಾ ಜಿಲ್ಲಾ ವಲಯದಲ್ಲಿ ಸೇವೆ ಸಲ್ಲಿಸಿದ್ದಲ್ಲಿ, ಅವರಿಗೆ ಸಂಬಂಧಿಸಿದ ಬಿಲ್ಲುಗಳನ್ನು ಕೈಬರಹದಲ್ಲಿ, ಸಂಬಂಧಿತ ಇಲಾಖಾ ಮುಖ್ಯಸ್ಥರ ಕಛೇರಿಯಲ್ಲೇ ತಯಾರಿಸಬೇಕೆಂದು ಮತ್ತು ಬಾಕಿ ಮೊತ್ತವನ್ನು ಪಾವತಿಸುವಂತೆ ಮೇಲೆ (9)ರಲ್ಲಿ ಓದಲಾದ ದಿನಾಂಕ:25.10.2012 ರ ಸರ್ಕಾರಿ ಆದೇಶದನ್ವಯ ಆದೇಶಿಸಲಾಗಿದೆ.

11. ಸಂಬಳದ ಅಥವಾ ಅದಕ್ಕೆ ಸಂಬಂಧಿಸಿದ ಬಾಕಿ ಮೊತ್ತ, ಹಬ್ಬದ ಮುಂಗಡ ಹಾಗೂ ಗಳಿಕೆ ರಜೆ ನಗದೀಕರಣದ ಕೈಬರಹದ ಯಾವುದೇ ಬಿಲ್ಲುಗಳನ್ನು ಅಂಗೀಕರಿಸಬಾರದೆಂಬ ಸೂಚನೆಗಳನ್ನು ಎಲ್ಲಾ ಖಜಾನೆಗಳಿಗೆ ಮೇಲೆ (10)ರಲ್ಲಿ ಓದಲಾದ ದಿನಾಂಕ: 04.05.2013ರ ಸರ್ಕಾರದ ಪತ್ರದನ್ವಯ ನೀಡಲಾಗಿದೆ.

12. ಹೆಚ್.ಆರ್.ಎಂ.ಎಸ್. ವಿದ್ಯುನ್ಮಾನ ವಿಧಾನದಲ್ಲಿ ತಪ್ಪಿಲ್ಲದಂತೆ ಸಂಬಳ ಮತ್ತು ಸಂಬಳಕ್ಕೆ ಸಂಬಂಧಿಸಿದ ಇತರೆ ಬಿಲ್ಲುಗಳನ್ನು ತಯಾರಿಸುವ ಬಗ್ಗೆ ಹಲವಾರು ಬಾರಿ ಸೂಚನೆಗಳನ್ನು ಕಾಲಕಾಲಕ್ಕೆ ನೀಡಿದ್ದರೂ ಮತ್ತು ಇಲಾಖಾ ಮುಖ್ಯಸ್ಥರ, ಸಂಪರ್ಕಾಧಿಕಾರಿಗಳ, ಬಟವಾಡೆ ಅಧಿಕಾರಿಗಳ ಪಾತ್ರ ಮತ್ತು ಜವಾಬ್ದಾರಿ ಬಗ್ಗೆ ತಿಳಿಸಿದ್ದರೂ, ತಪ್ಪಾದ ಮಾಹಿತಿಯನ್ನು ತಂತ್ರಾಂಶದಲ್ಲಿ ಈಗಲೂ ಸಹ ಅಳವಡಿಸುವ ಮೂಲಕ ಅನೇಕ ಸಮಸ್ಯೆಗಳಿಗೆ ದಾರಿ ಮಾಡಿಕೊಡುತ್ತಿರುವ ಪ್ರಕರಣಗಳು ಹೆಚ್.ಆರ್.ಎಂ.ಎಸ್. ನಿರ್ವಹಿಸುತ್ತಿರುವ ಇ-ಆಡಳಿತ ಕೇಂದ್ರದ ಗಮನಕ್ಕೆ ಬಂದಿರುತ್ತವೆ. ಆದ್ದರಿಂದ ಬಟವಾಡೆ ಅಧಿಕಾರಿಗಳು ಸಂಬಳ ಬಿಲ್ಲುಗಳನ್ನು ಎಲ್ಲಾ ರೀತಿಯಲ್ಲಿ ಸರಿಯಾಗಿ ತಪ್ಪಿಲ್ಲದಂತೆ ಹೆಚ್. ಆರ್.ಎಂ.ಎಸ್. ಮೂಲಕ ತಯಾರಿಸುವ ಸಲುವಾಗಿ ಅವರುಗಳಿಗೆ ಸವಿಸ್ತಾರವಾದ ಕ್ರೋಢಿಕೃತ ಸೂಚನೆಗಳನ್ನು ಹೊರಡಿಸುವ ಅವಶ್ಯಕತೆಯನ್ನು ಸರ್ಕಾರವು ಪರಿಗಣಿಸಿದೆ. ಸಂಪರ್ಕಾಧಿಕಾರಿಗಳು ಮತ್ತು ಇಲಾಖಾ ಮುಖ್ಯಸ್ಥರು ಈ ವಿಚಾರದಲ್ಲಿ ಬಟವಾಡೆ ಅಧಿಕಾರಿಗಳಿಗೆ ಸರಿಯಾದ ಮಾರ್ಗದರ್ಶನ ನೀಡುವ ಅವಶ್ಯಕತೆ ಇದೆಯೆಂದು ಕಂಡು ಬಂದಿದೆ. ಆದ್ದರಿಂದ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 27 ಇಆಇ 2014, ಬೆಂಗಳೂರು, ದಿನಾಂಕ: 11ನೇ ಏಪ್ರಿಲ್ 2014**

13. ಮಾನವ ಸಂಪನ್ಮೂಲ ವ್ಯವಸ್ಥೆಯ ಮೂಲಕ ಬಿಲ್ಲುಗಳನ್ನು ತಯಾರಿಸುವ ಸಲುವಾಗಿ ಹೊರಡಿಸಿರುವ ವಿವಿಧ ಆದೇಶ/ ಸುತ್ತೋಲೆ/ ಪತ್ರ ಇತ್ಯಾದಿಗಳನ್ನು ಪುನರುಚ್ಚರಿಸುತ್ತಾ, ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಗಳು (ಇನ್ನು ಮುಂದೆ ಡಿಡಿಓಗಳೆಂದು ಕರೆಯಲಾಗುವುದು) ಹೆಚ್.ಆರ್.ಎಂ.ಎಸ್ ಮೂಲಕ ಎಲ್ಲಾ ವಿಧದಲ್ಲಿ ದೋಷರಹಿತ ಬಿಲ್ಲುಗಳನ್ನು ತಯಾರಿಸುವ ಸಾಮರ್ಥ್ಯತೆಯನ್ನು ಹೊಂದುವ ಹಾಗೂ ಡಿಡಿಓಗಳು ತಪ್ಪಿಲ್ಲದ ರೀತಿ ಬಿಲ್ಲುಗಳನ್ನು ತಯಾರಿಸುವ ಪ್ರಕ್ರಿಯೆಯಲ್ಲಿ, ಪದನಾಮೀಕರಿಸಿದ ರಾಜ್ಯ ಸಂಪರ್ಕಾಧಿಕಾರಿಗಳವರು ಮತ್ತು ಇಲಾಖಾ ಮುಖ್ಯಸ್ಥರು (ಇನ್ನು ಮುಂದೆ ಹೆಚ್ಓಡಿ ಎಂದು ಕರೆಯಲಾಗುವುದು) ಅಗತ್ಯ ಮೇಲುಸ್ತುವಾರಿ ನಿರ್ವಹಿಸುವ ಹಾಗೂ ಅವರುಗಳಿಗೆ ಮಾರ್ಗದರ್ಶನ ನೀಡುವ ಸಾಮರ್ಥ್ಯತೆ ಹೊಂದಲು ಸರ್ಕಾರವು ಈ ಕೆಳಗಿನ ವಿವರವಾದ ಪ್ರಕ್ರಿಯೆಯನ್ನು ಜಾರಿಗೊಳಿಸಿದೆ.

14. ಇ–ಆಡಳಿತ ಕೇಂದ್ರ ಯಾವುದೇ ಮೂಲದಾಖಲಾತಿಗಳನ್ನು ಹೊಂದಿಲ್ಲ. ಈ ಕೇಂದ್ರವು ಡಿಡಿಓಗಳು/ ಹೆಚ್ಓಡಿಗಳು ದಾಖಲಿಸುವ ಸೇವಾ ಮತ್ತು ಸಂಬಳ ಸಂಬಂಧಿತ ಸೂಕ್ತ ದತ್ತಾಂಶವನ್ನು ಅಳವಡಿಸಲು, ವಿದ್ಯುನ್ಮಾನ ತಂತ್ರಾಂಶ ಸಾಧನ ವ್ಯವಸ್ಥೆಯನ್ನು ಒದಗಿಸುವ ಸಂಸ್ಥೆಯಾಗಿದೆ. ವೇತನ ನಿಗದಿ, ರಜೆ, ವರ್ಗಾವಣೆ, ಪದೋನ್ನತಿ, ಸೇವೆಯಿಂದ ನಿರ್ಗಮನ, ಶಿಸ್ತು ವಿಚಾರ ಇತ್ಯಾದಿಗಳ ಮೂಲ ದಾಖಲಾತಿ ಮತ್ತು ಆದೇಶಗಳು, ಅವುಗಳನ್ನು ನಿರ್ವಹಿಸುವ ಕಛೇರಿ/ಇಲಾಖೆಯ ಸುಪರ್ದಿಯಲ್ಲಿರುತ್ತದೆ. ಡಿಡಿಓಗಳು ದಾಖಲಿಸಿರುವ/ ಅಳವಡಿಸುವ ದತ್ತಾಂಶಗಳನ್ನು ಮಾತ್ರ ಹೆಚ್.ಆರ್.ಎಂ.ಎಸ್. ನಿರ್ವಹಿಸುತ್ತದೆ. ಆದ್ದರಿಂದ ಡಿಡಿಓಗಳು ಮತ್ತು ನಾಮ ನಿರ್ದೇಶಿತ ಸಂಪರ್ಕಾಧಿಕಾರಿಗಳು ಸರ್ಕಾರಿ ನೌಕರರ ಸೂಕ್ತ ದತ್ತಾಂಶವನ್ನು ಹೆಚ್.ಆರ್.ಎಂ.ಎಸ್ ಗೆ ಅಳವಡಿಸುವಾಗ ವಿಶೇಷ ಗಮನವನ್ನು ನೀಡಬೇಕು. ಹೀಗೆ ಕ್ರಮವಹಿಸಲು ತಪ್ಪಿದಲ್ಲಿ ಹೆಚ್.ಆರ್.ಎಂ.ಎಸ್ ನಲ್ಲಿ ತಪ್ಪಾದ ವರದಿಗಳು ಉತ್ಪಾದನೆಯಾಗಿ ದೋಷಪೂರಿತ ಫಲಿತಾಂಶ ದೊರೆಯುತ್ತದೆ. ಇಲಾಖಾ ಮುಖ್ಯಸ್ಥರು ತಮ್ಮ ಅಧೀನದಲ್ಲಿ ಬರುವ ಎಲ್ಲಾ ನೌಕರರ ದಾಖಲೆಗಳನ್ನು ಹಾಗೂ ದಸ್ತಾವೇಜುಗಳನ್ನು ಪಡೆಯುವ/ವೀಕ್ಷಿಸುವ ಅವಕಾಶ ಹೊಂದಿರುತ್ತಾರೆ. ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 404ರನ್ವಯ ಡಿಡಿಓಗಳು ಸೇವಾ ದಾಖಲೆಗಳ ಕಸ್ಟೋಡಿಯನ್ ಆಗಿದ್ದಾರೆ. ಡಿಡಿಓಗಳು ಖಜಾನೆಯಿಂದ ಬಿಲ್ಲುಗಳನ್ನು ಸೆಳೆಯುವಾಗ ಅವುಗಳು ಸರಿಯಾಗಿರುವುದರ ಬಗ್ಗೆ ಖಚಿತಪಡಿಸಿಕೊಳ್ಳಬೇಕೆಂಬ ಮತ್ತು ಬಿಲ್ಲುಗಳನ್ನು ತಯಾರಿಸುವಾಗ ಏನಾದರೂ ಲೋಪವುಂಟಾದಲ್ಲಿ, ಆ ಲೋಪಕ್ಕೆ ಅವರೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆಂಬ ಅಂಶವನ್ನು ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇಧ 62 ರಲ್ಲಿ ಪ್ರಚುರಪಡಿಸಲಾಗಿರುತ್ತದೆ. ಹೆಚ್.ಆರ್.ಎಂ.ಎಸ್ ವ್ಯವಸ್ಥೆಯು ಡಿಡಿಓಗಳಿಗೆ, ನೌಕರರ ಸೇವಾ ಮಾಹಿತಿ ಮತ್ತು ಸಂಬಳ ಮಾಹಿತಿ ಅಳವಡಿಸಿ ವೇತನ ಬಿಲ್ಲುಗಳನ್ನು ತಯಾರಿಸಲು ನೀಡಿರುವ ಒಂದು ವೇದಿಕೆಯಾಗಿದೆ.

15. ಆದ್ದರಿಂದ, ಹೆಚ್.ಆರ್.ಎಂ.ಎಸ್ ಅನ್ನು ಉಪಯೋಗಿಸಿಕೊಂಡು ಸರಿಯಾದ ಮತ್ತು ಎಲ್ಲಾ ವಿಧದಲ್ಲಿ ಕರಾರುವಕ್ಕಾದ ಬಿಲ್ಲುಗಳ ತಯಾರಿಕೆಯನ್ನು ಖಚಿತಪಡಿಸಿಕೊಳ್ಳುವುದು ಡಿಡಿಓಗಳ ಜವಾಬ್ದಾರಿಯಾಗಿದೆ. ಸರಿಯಾಗಿಲ್ಲದ ರೀತಿ ಕಾಣಬರುವ, ಕಾರಣವಿಲ್ಲದ ಮತ್ತು ಅಸಹಜ ಅಂಕಿ ಬಿಲ್ಲುಗಳ ಬಗ್ಗೆ ಅವರು ಪರೀಕ್ಷಿಸಬೇಕು. ಉದಾಹರಣೆಗೆ, ನಿಗದಿಗಿಂತ ಹೆಚ್ಚು ಅಥವಾ ಕಡಿಮೆ ಕಂಡುಬರುವ ವೇತನ/ ದಿನಾಂಕ/ ವರ್ಷದಂತಹ ಅಸ್ವಾಭಾವಿಕ ಬದಲಾವಣೆಗಳು ಕಂಡು ಬಂದಲ್ಲಿ ಡಿಡಿಓಗಳು ಅಂತಹ ಬಿಲ್ಲುಗಳನ್ನು ಎಚ್ಚರಿಕೆಯಿಂದ ತುಲನೆ ಮಾಡಿ ಶೇ. 100 ರಷ್ಟು ದತ್ತಾಂಶವನ್ನು ಖಚಿತಪಡಿಸಿಕೊಂಡು, ತಪ್ಪುಗಳನ್ನು ಸರಿಪಡಿಸುವ ಮೂಲಕ ಸರಿಯಾದ ದತ್ತಾಂಶವನ್ನು ದಾಖಲಿಸಬೇಕು.

16. ಮಂಜೂರಾತಿ ಅಧಿಕಾರ ಹಾಗೂ ಮಂಜೂರಾತಿ ವ್ಯಾಪಗತಗೊಳ್ಳುವ ಬಗ್ಗೆಕರ್ನಾಟಕ ಆರ್ಥಿಕ ಸಂಹಿತೆ ಅನುಚ್ಛೇಧ 304 ಹಾಗೂ 305 ರಲ್ಲಿರುವ ನಿಯಮ ಆಧಾರಿತ ಅವಶ್ಯಕತೆಗಳು, ಬಿಲ್ಲುಗಳನ್ನು ಸಿದ್ಧಪಡಿಸುವಾಗ ಪಾಲನೆಯಾಗಿರುವುದನ್ನು ಖಚಿತ ಪಡಿಸಿಕೊಳ್ಳತಕ್ಕದ್ದು.

17. ಇ-ಆಡಳಿತ ಕೇಂದ್ರವು ಹೆಚ್.ಆರ್.ಎಂ.ಎಸ್ ತಂತ್ರಾಂಶ ಸೇವೆ (Soft-ware Service Provider) ಒದಗಿಸುವ ಕೇಂದ್ರವಾಗಿದೆ. ಈ ಕೇಂದ್ರವು ಯಾವುದೇ ಡಿಡಿಓ ಅಥವಾ ನೌಕರರೊಂದಿಗೆ ನೇರ ಪತ್ರ ವ್ಯವಹಾರ ನಡೆಸುವುದಿಲ್ಲ.

18. ಕಾರ್ಯನೀತಿ ಬದಲಾವಣೆ ಬಗ್ಗೆ ಯಾವುದೇ ಇಲಾಖೆಗಳಿಂದ ಕೋರಿಕೆ ಸ್ವೀಕೃತವಾದಲ್ಲಿ ಅದನ್ನು ಸ್ಟೀರಿಂಗ್ ಸಮಿತಿ ಅಥವಾ ಬದಲಾವಣೆ ಕೋರಿಕೆ ಸಮಿತಿ ಮುಂದೆ ಸೂಕ್ತ ಆದೇಶಕ್ಕಾಗಿ ಮಂಡಿಸಲಾಗುವುದು. ಈ ಸಮಿತಿಗಳು ಅನುಮೋದನೆ ನೀಡಿದ ನಂತರ ಬದಲಾವಣೆಗಳನ್ನು ಹೆಚ್.ಆರ್.ಎಂ.ಎಸ್ ತಂತ್ರಾಂಶದಲ್ಲಿ ಅಳವಡಿಸಲಾಗುವುದು.

19. ಇ- ಆಡಳಿತ ಕೇಂದ್ರದಲ್ಲಿನ ಇ-ಆಡಳಿತ ಕೋಶದ ಡಿಡಿಓಗಳ, ರಾಜ್ಯ ಸಂಪರ್ಕಾಧಿಕಾರಿಗಳ ಮತ್ತು ಹೆಚ್ಓಡಿ ಗಳ ಪಾತ್ರ ಮತ್ತು ಜವಾಬ್ದಾರಿಗಳು ಈ ಮುಂದಿನಂತಿವೆ.

**ಪಾತ್ರ ಮತ್ತು ಜವಾಬ್ದಾರಿಗಳು**

20. **ಇ – ಆಡಳಿತ ಕೇಂದ್ರ:-**

20.1 ಎಲ್ಲಾ ಬಳಕೆ ಇಲಾಖೆಗಳಿಗೆ ಕೇಂದ್ರೀಕೃತ ವಿದ್ಯುನ್ಮಾನ ವೇದಿಕೆಯನ್ನು ಕಲ್ಪಿಸುವುದು.

20.2 ವಿವಿಧ ಅಧಿಕೃತ ಹಕ್ಕುದಾರರಿಗೆ ವೆಬ್ ಆಧಾರಿತ ಹೆಚ್.ಆರ್.ಎಂ.ಎಸ್. ಸೇವೆ ಒದಗಿಸುವುದು.

20.3 ಸೂಕ್ತ ಬ್ಯಾಕ್‌ಅಪ್ ನೀತಿಗಳೊಂದಿಗೆ (Back up Policy) ದತ್ತಾಂಶದ ಸಾಫ್ಟ್ ಕಾಪಿಯ ಭದ್ರತೆ ಮತ್ತು ಸಂರಕ್ಷಣೆಯನ್ನು ಖಚಿತಪಡಿಸಿಕೊಳ್ಳುವುದು.

20.4 ಮಾನವ ಸಂಪನ್ಮೂಲ ಸಂಬಂಧಿತ ಎಂಐಎಸ್ ವರದಿಗಳನ್ನು ಆಯಾಯ ಪ್ರಾಧಿಕಾರಗಳಿಗೆ ಅಗತ್ಯತೆಯನ್ನು ಆಧರಿಸಿ ಒದಗಿಸುವುದು.

20.5 ಅನುಮೋದಿತ ಕಾರ್ಯನೀತಿ ನಿಯಮಗಳನ್ವಯ ಬಳಕೆ ಇಲಾಖೆಗಳ ಕೋರಿಕೆಗಳನ್ನು ಆಧರಿಸಿ ಅನುಕೂಲತೆ ವೃದ್ಧಿಸಿ ಜಾರಿಗೊಳಿಸುವುದು.

20.6 ಬದಲಾವಣೆ ಕೋರಿಕೆ ಪ್ರಸ್ತಾವನೆಗಳನ್ನು ಸೂಕ್ತ ಆದೇಶಕ್ಕಾಗಿ ಬದಲಾವಣೆ ಸಮಿತಿ ಮುಂದೆ ಮಂಡಿಸುವುದು.

20.7 ಅಗತ್ಯತೆಗನುಸಾರವಾಗಿ ಸ್ಟೀರಿಂಗ್ ಸಮಿತಿ ಸಭೆಯನ್ನು ಏರ್ಪಡಿಸುವುದು.

20.8 ನಾಮ ನಿರ್ದೇಶಿತ ರಾಜ್ಯ ಸಂಪರ್ಕಾಧಿಕಾರಿ/ಮಾಸ್ಟರ್ ತರಬೇತುದಾರರಿಗೆ, ತರಬೇತಿ/ ಕಾರ್ಯಗಾರವನ್ನು ಏರ್ಪಡಿಸುವುದು.

20.9 ಇಲಾಖೆಗಳ/ಜಿಲ್ಲೆಗಳ ಕೋರಿಕೆಯನ್ನು ಆಧರಿಸಿ ತರಬೇತಿ/ಕಾರ್ಯಾಗಾರಗಳನ್ನು ನಡೆಸುವುದು.

20.10 ಇ-ಆಡಳಿತ ಕೇಂದ್ರವು ದತ್ತಾಂಶ ಶೇಖರಣಾ ಕಚೇರಿಯಾಗಿದೆ ಮತ್ತು ಈ ದತ್ತಾಂಶದ ನಿಖರತೆ ಜವಾಬ್ದಾರಿಯು ಇಲಾಖೆಯ ಡಿಡಿಓಗಳದಾಗಿರುತ್ತದೆ.

20.11 ಇಲಾಖೆಗಳು/ಡಿಡಿಓಗಳು ದತ್ತಾಂಶವನ್ನು ತಪ್ಪಾಗಿ ದಾಖಲಿಸುವುದರಿಂದ ಸಂಬಳ ಇತ್ಯಾದಿಗಳ ಕ್ಲೇಮ್‌ಗಳ ಪಾವತಿಯಲ್ಲಿ ಉಂಟಾಗುವ ವ್ಯತ್ಯಾಸಕ್ಕೆ ಮತ್ತು ವಿಳಂಬಕ್ಕೆ ಇ-ಆಡಳಿತ ಕೇಂದ್ರವು ಜವಾಬ್ದಾರಿಯಾಗಿರುವುದಿಲ್ಲ.

21. **ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಗಳು(ಡಿಡಿಓಗಳು).**

21.1 ಸಂಬಳ ಬಾಕಿ ಮುಂತಾದ ಕ್ಲೇಮ್‌ಗಳು ಸಕಾಲದಲ್ಲಿ ಪಾವತಿಯಾಗುವುದನ್ನು ಖಚಿತ ಪಡಿಸಿಕೊಳ್ಳತಕ್ಕದ್ದು (ಕರ್ನಾಟಕ ಆರ್ಥಿಕ ಸಂಹಿತೆ ಅನುಚ್ಛೇಧ 24 ,62 ಮತ್ತು 80).

21.2 ಸೂಕ್ತ ತರಬೇತಿ ಮತ್ತು ಕರ್ನಾಟಕ ನಾಗರೀಕ ಸೇವಾ ನಿಯಮಗಳು / ಕರ್ನಾಟಕ ಆರ್ಥಿಕ ಸಂಹಿತೆ ಮತ್ತು ಇತರೆ ಸಂಬಂಧಿತ ನಿಯಮಗಳಿಗನುಸಾರ ಹೆಚ್.ಆರ್.ಎಂ.ಎಸ್ ತಂತ್ರಾಂಶದ ಬಳಕೆಯಾಗುವುದನ್ನು ಖಚಿತಪಡಿಸಿಕೊಳ್ಳುವುದು.

21.3 ನೌಕರರ ಸರಿಯಾದ ವಿವರಗಳು ಹೆಚ್.ಆರ್.ಎಂ.ಎಸ್ ನಲ್ಲಿ ದಾಖಲಾಗಿರುವುದನ್ನು ಖಚಿತ ಪಡಿಸಿಕೊಳ್ಳುವುದು.

21.4 ಹೆಚ್.ಆರ್.ಎಂ.ಎಸ್ ನಲ್ಲಿ ಎಲ್ಲಾ ರೀತಿಯಲ್ಲಿ ನೌಕರರ ಸರಿಯಾದ ಮತ್ತು ಪೂರ್ಣವಾದ ವಿವರಗಳು ಸೇವಾವಹಿಯಲ್ಲಿ ದಾಖಲಾಗಿರುವುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

21.5 ನೌಕರರಿಗೆ ಸಂಬಂಧಿಸಿದ ಎಲ್ಲಾ ಘಟನೆಗಳು ಆಗಿಂದಾಗ್ಗೆ ಹೆಚ್.ಆರ್.ಎಂ.ಎಸ್ ನಲ್ಲಿ ಪೂರ್ಣವಾಗಿ ದಾಖಲಾಗಿರುವುದನ್ನು ಖಚಿತಪಡಿಸಿಕೊಳ್ಳುವುದು.

21.6 ಹೆಚ್.ಆರ್.ಎಂ.ಎಸ್ ನಲ್ಲಿ ದಾಖಲಿಸುವಾಗ ಯಾವುದಾದರೂ ಸಮಸ್ಯೆ ಉಂಟಾದಲ್ಲಿ,ಅಂತಹ ಸಮಸ್ಯೆಯನ್ನು ಸರಿಪಡಿಸುವ ಸಲುವಾಗಿ ನಾಮ ನಿರ್ದೇಶಿತ ಸಂಪರ್ಕಾಧಿಕಾರಿಗಳಿಗೆ ಮೇಲುಸ್ತುವಾರಿ ವ್ಯವಸ್ಥೆ ಅಡಿಯಲ್ಲಿ ವರದಿ ಮಾಡುವುದು.

21.7 ಹೆಚ್.ಆರ್.ಎಂ.ಎಸ್ ನಿರಂತರವಾಗಿ ಯಾವುದೇ ತಡೆಯಿಲ್ಲದೆ ಮುಂದುವರೆಯಲು ಇಲಾಖೆಯಲ್ಲಿ ಸೂಕ್ತ ತರಬೇತಿ ಹೊಂದಿರುವ ಮತ್ತೊಬ್ಬ ಸಿಬ್ಬಂದಿಯನ್ನು ನೇಮಿಸುವುದು. ನೇಮಿತ ಅಧಿಕಾರಿಯ ಗೈರುಹಾಜರಿಯಲ್ಲಿ ಹೆಚ್.ಆರ್.ಎಂ.ಎಸ್ ನಿರಂತರವಾಗಿ ಯಾವುದೇ ಅಡೆತಡೆ ಇಲ್ಲದೆ ಮುಂದುವರೆಯಲು ಇದರಿಂದಾಗಿ ಅನುಕೂಲವಾಗುವುದು.

21.8 ರಕ್ಷಣಾ ದೃಷ್ಠಿಯಿಂದ ಪಾಸ್‌ವರ್ಡ್ ಮತ್ತು ಯೂಜರ್ ಐಡಿಯ ರಹಸ್ಯತೆ ಕಾಪಾಡಿಕೊಳ್ಳುವುದು.

21.9 ಯಾವುದೇ ಸ್ಪಷ್ಟೀಕರಣ ಅಥವಾ ತಿದ್ದುಪಡಿಗಳಿಗಾಗಿ, ನಾಮ ನಿರ್ದೇಶಿತ ರಾಜ್ಯ ಸಂಪರ್ಕಾಧಿಕಾರಿ/ ಹೆಚ್‌ಓಡಿಗಳನ್ನು ಮಾತ್ರ ಸಂಪರ್ಕಿಸತಕ್ಕುದು.

**22. ನಾಮ ನಿರ್ದೇಶಿತ ರಾಜ್ಯ ಸಂಪರ್ಕಾಧಿಕಾರಿಗಳು.**

22.1 ಇಲಾಖೆಗಳ ಎಲ್ಲಾ ಡಿಡಿಓ ಗಳು ಹೆಚ್.ಆರ್.ಎಂ.ಎಸ್ ವ್ಯವಸ್ಥೆ ಜಾರಿಗೊಳಿಸುವ ಉಸ್ತುವಾರಿ ನೋಡಿಕೊಳ್ಳುವುದು.

22.2 ಸರಿಯಾದ ಮಾಹಿತಿಯನ್ನು ಎಲ್ಲಾ ಡಿಡಿಓಗಳು ಹೆಚ್.ಆರ್.ಎಂ.ಎಸ್ ನಲ್ಲಿ ಪೂರ್ಣವಾಗಿ ದಾಖಲಿಸಿದ್ದಾರೆಂಬುದನ್ನು ಖಚಿತ ಪಡಿಸಿಕೊಳ್ಳುವುದು.

22.3 ಇಲಾಖೆಯಲ್ಲಿ ಮಾಸ್ಟರ್ ತರಬೇತಿದಾರರನ್ನು ಗುರುತಿಸುವುದು.

22.4 ಮಾಸ್ಟರ್ ಟ್ರೈನರ್ ಗಳಿಗೆ ತರಬೇತಿ/ರಿಫ್ರೆಶರ್ ಕೋರ್ಸ್‌ಗಳನ್ನು ಏರ್ಪಡಿಸುವುದು.

22.5 ಹೆಚ್.ಆರ್.ಎಂ.ಎಸ್ ಉಪಯೋಗಿಸುವಲ್ಲಿ ನಿರತರಾಗಿರುವ ಎಲ್ಲಾ ಡಿಡಿಓಗಳು ಹಾಗೂ ಅವರ ಸಹಾಯಕರುಗಳಿಗೆ ಅಗತ್ಯತೆಗನುಸಾರವಾಗಿ ಇಲಾಖೆಯ ಮಾಸ್ಟರ್ ಟ್ರೈನರ್‌ಗಳನ್ನು ಉಪಯೋಗಿಸಿಕೊಂಡು ತರಬೇತಿ/ ರಿಫ್ರೆಶರ್ ಕೋರ್ಸ್‌ಗಳನ್ನು ಏರ್ಪಡಿಸುವುದು.

22.6 ಹೆಚ್.ಆರ್.ಎಂ.ಎಸ್ ಯೋಜನೆಯ ಅಳವಡಿಕೆಯಲ್ಲಿ ಯಾವುದಾದರೂ ಅನುಮಾನ ಉಂಟಾದಂತಹ ಸಂದರ್ಭದಲ್ಲಿ, ಡಿಡಿಓಗಳು ಸಂಪರ್ಕಿಸಬಹುದಾದ ಮಾಸ್ಟರ್ ಟ್ರೈನರ್ ಗಳ ಪಟ್ಟಿಯನ್ನು ತಯಾರಿಸಿ, ಸದರಿ ಪಟ್ಟಿಯನ್ನು ಸಂಬಂಧಿತರೆಲ್ಲರಿಗೂ ಕಳುಹಿಸುವುದು.

22.7 ಒಂದು ಪಕ್ಷ ಮಾಸ್ಟರ್ ಟ್ರೈನರ್ ಗಳು ಸಮಸ್ಯೆಗೆ ಪರಿಹಾರ ಒದಗಿಸದಿದ್ದಲ್ಲಿ ಮುಖ್ಯ ಕಚೇರಿಯಲ್ಲಿನ ಮಾಸ್ಟರ್ ಟ್ರೈನರ್/ನಾಮ ನಿರ್ದೇಶಿತ ರಾಜ್ಯ ಸಂಪರ್ಕಾಧಿಕಾರಿಗಳನ್ನು ಸಂಪರ್ಕಿಸಲು ಡಿಡಿಓಗಳಿಗೆ ತಿಳಿಸುವುದು.

22.8 ಮುಖ್ಯ ಕಚೇರಿಯ ಮಾಸ್ಟರ್ ಟ್ರೈನರ್‌ಗಳು ಅಥವಾ ನಾಮ ನಿರ್ದೇಶಿತ ರಾಜ್ಯ ಸಂಪರ್ಕಾಧಿಕಾರಿಗಳೂ ಸಹ ಸಮಸ್ಯೆಗೆ ಪರಿಹಾರ ನೀಡದಿದ್ದಾಗ ಹೆಚ್.ಆರ್.ಎಂ.ಎಸ್ ವಿಧಾನದಲ್ಲಿ ಆನ್ ಲೈನ್ ಮೂಲಕ ನಾಮನಿರ್ದೇಶಿತ ರಾಜ್ಯ ಸಂಪರ್ಕಾಧಿಕಾರಿಗಳು, ಹೆಚ್.ಆರ್.ಎಂ.ಎಸ್ ತಂತ್ರಾಂಶದಲ್ಲಿ ದೂರನ್ನು ದಾಖಲಿಸಬಹುದು.

22.9 ಇ–ಆಡಳಿತ ಕೇಂದ್ರವು ಏರ್ಪಡಿಸುವ ಎಲ್ಲಾ ತರಬೇತಿಗಳಿಗೆ ಹಾಜರಾಗುವುದು. ಇ-ಆಡಳಿತ ಕೇಂದ್ರ ನೀಡುವ ಎಲ್ಲಾ ಮಾರ್ಗದರ್ಶನಗಳನ್ನು ಕಡ್ಡಾಯವಾಗಿ ಪಾಲಿಸುವುದು.

22.10 ಇಲಾಖೆಗೆ ಹಂಚಿಕೆಯಾಗಿರುವ ಪ್ರವೇಶ ಸಂಕೇತ ಉಪಯೋಗಿಸುವ ಮೂಲಕ ಡಿಡಿಓಗಳು ಈ ಕೆಳಕಾಣಿಸಿದ ವಿಷಯಗಳ ಕುರಿತು ಹೆಚ್.ಆರ್.ಎಂ.ಎಸ್ ಬಳಕೆಯನ್ನು ಸೂಕ್ತ ರೀತಿ ಉಪಯೋಗಿಸುತ್ತಿದ್ದಾರೆಯೇ ಎಂಬುದನ್ನು ಖಚಿತಪಡಿಸಿಕೊಳ್ಳುವುದು.

22.10.1 ಡಿಡಿಓಗಳು ಪಾವತಿಯ ಕ್ಲೈಮ್ ಗಳ ಬಿಲ್ಲುಗಳನ್ನು ತಯಾರಿಸುವ ಮೂಲಕ ಸಂಬಳ, ಸಂಬಳದ ಬಾಕಿ, ಇತ್ಯಾದಿಗಳನ್ನು ಸಕಾಲದಲ್ಲಿ ಪಾವತಿಸುತ್ತಿರುವರೇ ಎಂಬುದನ್ನು ಖಚಿತ ಪಡಿಸಿಕೊಳ್ಳುವುದು.

22.10.2 ನೌಕರರಿಗೆ ದೊರೆಯಬೇಕಾದ ವಾರ್ಷಿಕ ವೇತನ ಬಡ್ತಿಗಳು ಸಕಾಲದಲ್ಲಿ ಪಾವತಿಯಾಗುತ್ತಿದೆಯೇ ಎಂಬುದನ್ನು ಗಮನಿಸುವುದು.

22.10.3 ವರ್ಗಾವಣೆ, ಮುಂಬಡ್ತಿ, ರಜೆ, ತರಬೇತಿ ಇತ್ಯಾದಿಗಳ ಸಂಬಂಧಿತ ಮಾಹಿತಿಯನ್ನು ದಾಖಲಾತಿಗಳಲ್ಲಿ ವ್ಯವಸ್ಥಿತವಾಗಿ ಆಗಿಂದಾಗ್ಗೆ ಸೇರಿಸುತ್ತಿದ್ದಾರೆಯೇ ಎಂಬುದನ್ನು ಗಮನಿಸುವುದು.

22.10.4 ಮೇಲೆ ತಿಳಿಸಿದ ಕ್ರಮಗಳನ್ನು ತೆಗೆದುಕೊಳ್ಳುವಲ್ಲಿ ಸಕಾರಣವಿಲ್ಲದೆ ಅನುಚಿತ ವಿಳಂಬವಾದಲ್ಲಿ, ಅಂತಹ ವಿಳಂಬವನ್ನು ಇಲಾಖಾ ಮುಖ್ಯಸ್ಥರ ಗಮನಕ್ಕೆ ತಂದು, ಸಂಬಂಧಿತ ಡಿಡಿಓ ಗಳ ವಿರುದ್ಧ ಸೂಕ್ತ ಕ್ರಮ ಜರುಗಿಸುವುದು.

22.11 ಎಲ್ಲಾ ಡಿಡಿಓಗಳ ಕಚೇರಿಗಳ ಕಾಲಿಕ ಪರಿವೀಕ್ಷಣೆ ನಡೆಸುವುದು ಮತ್ತು ಹೆಚ್.ಆರ್.ಎಂ.ಎಸ್ ನಲ್ಲಿ ಅಳವಡಿಸಿರುವ ಮಾಹಿತಿಯು ಸೇವಾ ಪುಸ್ತಕದಲ್ಲಿರುವ ವೈಯಕ್ತಿಕ ಕಡತಗಳ ವಿವರಗಳಿಗೆ ಸರಿ ಹೊಂದುತ್ತದೆಯೇ ಎಂಬುದನ್ನು ಪರಿಶೀಲಿಸಿ ದೃಢೀಕರಿಸುವುದು.

22.12 ಹೆಚ್.ಆರ್.ಎಂ.ಎಸ್ ಪ್ರಕ್ರಿಯೆ ಪುನರಾವಲೋಕನಕ್ಕೆ ಮೊದಲಿಗೆ, ಒಮ್ಮೆ ಹೆಚ್ಓಡಿಯ ಅಧ್ಯಕ್ಷತೆಯಲ್ಲಿ ಮತ್ತು ನಂತರ ಪ್ರತಿ ತಿಂಗಳು ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ವಿಮರ್ಶಾ ಸಭೆಗಳನ್ನು ಏರ್ಪಡಿಸುವುದು.

22.13 ವೇತನ ಬಿಲ್ಲು ಇತ್ಯಾದಿಗಳ ಕ್ಲೈಮ್‌ಗಳನ್ನು ಹೆಚ್.ಆರ್.ಎಂ.ಎಸ್ ಮೂಲಕವೇ ತಯಾರಿಸಲು ಎಲ್ಲಾ ಡಿಡಿಓಗಳಿಗೆ ಸಲಹೆ ನೀಡುವುದು ಮತ್ತು ಅವುಗಳನ್ನು ನಿಷ್ಠೆಯಿಂದ ಪಾಲಿಸದಿದ್ದಲ್ಲಿ ಉಂಟಾಗುವ ಪ್ರತಿಕೂಲ ಪರಿಣಾಮಗಳ ಬಗ್ಗೆ ಮಾರ್ಗದರ್ಶನ ನೀಡುವುದು.

22.14 ಹೊಸ ಬಳಕೆದಾರರ ಸೃಜನೆಗೆ ಮುನ್ನ, ಖಜಾನೆ ಇಲಾಖೆಯಿಂದ ಡಿಡಿಓಗಳಿಗೆ ವಿಶಿಷ್ಟ ಡಿಡಿಓ ಕೋಡ್ ಸಂಖ್ಯೆ ನೀಡಿದೆಯೇ ಎಂಬುದನ್ನು ಪರಿಶೀಲಿಸುವುದು.

22.15 ಎಲ್ಲಾ ಡಿಡಿಓಗಳು ಆರ್ಥಿಕ ಇಲಾಖೆ ಹಂಚಿಕೆ ಮಾಡಿರುವ ಸೂಕ್ತ ಆಯವ್ಯಯ ವರ್ಗೀಕರಣವನ್ನು (ಲೆಕ್ಕ ಶೀರ್ಷಿಕೆ) ಉಪಯೋಗಿಸುತ್ತಿದ್ದಾರೆಯೇ ಎಂಬುದನ್ನು ಖಚಿತಪಡಿಸಿಕೊಳ್ಳುವುದು. ತಪ್ಪಿದಲ್ಲಿ ಡಿಡಿಓಗಳಿಗೆ ಅದನ್ನು ಸರಿಪಡಿಸಲು ತಿಳಿಸುವುದು.

22.16 ಡಿಡಿಓಗಳ ಆನ್ ಲೈನ್ ಸಮಸ್ಯೆಗಳಿಗೆ ಸಕಾಲದಲ್ಲಿ ಪರಿಹಾರ ಒದಗಿಸುವುದನ್ನು ಖಚಿತಪಡಿಸಿಕೊಳ್ಳುವುದು.

23. **ಇಲಾಖಾ ಮುಖ್ಯಸ್ಥರು.**

23.1 ಮೇಲೆ ತಿಳಿಸಿದ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ಡಿಡಿಓಗಳು ಮತ್ತು ನಾಮನಿರ್ದೇಶಿತ ಸಂಪರ್ಕಾಧಿಕಾರಿಗಳು ಸಮರ್ಪಕವಾಗಿ ನಿರ್ವಹಿಸುತ್ತಿದ್ದಾರೆಯೇ ಎಂಬುದನ್ನು ಖಚಿತ ಪಡಿಸಿಕೊಳ್ಳುವುದು.

23.2 ಈ ಕೆಳಗೆ ನಮೂದಿಸಿದ ಸೇವಾ/ಆರ್ಥಿಕ ಮಾಹಿತಿಯನ್ನು ಇ-ಆಡಳಿತ ಕೇಂದ್ರಕ್ಕೆ ಒದಗಿಸುವುದು.

23.2.1 ಸೇವಾ ಮತ್ತು ವೇತನ ಸಂಬಂಧಿತ ನಿಗದಿಪಡಿಸಿರುವ ಇಲಾಖಾ ವ್ಯವಹಾರ ನಿಯಮಗಳು.

23.2.2 ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳಿಗನುಸಾರ ಲೆಕ್ಕ ಶೀರ್ಷಿಕೆವಾರು – ಹುದ್ದೆವಾರು-ಡಿಡಿಓವಾರು ,ಮಂಜೂರಾದ ಸಿಬ್ಬಂದಿ ಬಲ.

23.2.3 ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳಿಗನುಸಾರ ಹುದ್ದೆ – ವೇತನ ಶ್ರೇಣಿ - ಗುಂಪು ಇವುಗಳ ನಿರೂಪಣಾ ವಿವರಣೆಗಳು.

23.2.4 ಕರ್ನಾಟಕ ಸಿವಿಲ್ ಸೇವೆಗಳು (ಸೇವಾ ಮತ್ತು ಕನ್ನಡ ಇಲಾಖಾ ಪರೀಕ್ಷೆಗಳು) ನಿಯಮಾವಳಿ, 1974 ರನ್ವಯ ಇಲಾಖೆಯ ಪ್ರತಿಯೊಂದು ಹುದ್ದೆಗೆ ನಿಗದಿಗೊಳಿಸಿರುವ ಇಲಾಖಾ ಪರೀಕ್ಷೆ ವಿವರಗಳು.

23.3 ಇಲಾಖೆಯ ಆಯವ್ಯಯ ಹಂಚಿಕೆಯಿಂದ ಗಣಕೀಕರಣದ ಮೂಲ ಸೌಲಭ್ಯಗಳನ್ನು ಡಿಡಿಓಗಳಿಗೆ ಒದಗಿಸುವುದು.

23.4 ಇಲಾಖೆಯಲ್ಲಿನ ಯಾವುದೇ ಡಿಡಿಓಗಳಿಗೆ ಕಡಿಮೆ ದರ್ಜೆಯಿಲ್ಲದ ಅವರ ಕಚೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸೂಕ್ತ ಅಧಿಕಾರಿಯೊಬ್ಬರನ್ನು ರಾಜ್ಯ ಸಂಪರ್ಕಾಧಿಕಾರಿಯನ್ನಾಗಿ ನಾಮ ನಿರ್ದೇಶಿಸುವುದು.

23.5 ಡಿಡಿಓಗಳ ವರ್ಗಾವಣೆಯಾದಾಗ/ಡಿಡಿಓಗಳು ಹಾಜರಿಲ್ಲದ ವೇಳೆಯಲ್ಲಿ ಬದಲಿ ಸಿಬ್ಬಂದಿಗೆ ಸೂಕ್ತ ತಿಳುವಳಿಕೆ ನೀಡುವುದನ್ನು ಖಚಿತ ಪಡಿಸಿಕೊಳ್ಳುವುದು.

23.6 ಕಾಲಿಕ, ಸ್ಥಳೀಯ ಪರಿವೀಕ್ಷಣೆ ವೇಳೆಯಲ್ಲಿ ಕನಿಷ್ಟ ಶೇ. 5 ರಷ್ಟು ನೌಕರರ ಸೇವಾವಹಿಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 412 ರನ್ವಯ ತಪಾಸಣೆ ಮಾಡುವುದು.

23.7 ಇ-ಆಡಳಿತ ಕೇಂದ್ರದ ವತಿಯಿಂದ ಆಯೋಜಿಸುವ ಸಭೆಗಳಿಗೆ ತಪ್ಪದೆ ಹಾಜರಾಗುವುದು

23.8 ಹೆಚ್.ಆರ್.ಎಂ ಎಸ್ ಸಮರ್ಪಿತ ಕೋಶವನ್ನು ಸೃಜಿಸಲು ಕ್ರಮ ತೆಗೆದುಕೊಳ್ಳುವುದು.

24. ಇತರೆ ಎಲ್ಲಾ ಸೇವಾ ವಿಷಯಗಳಿಗೆ ಸಂಬಂಧಿಸಿದಂತೆ ಈ ಆದೇಶದಲ್ಲಿ ಅಡಕವಾಗಿಲ್ಲದಿರುವ ಯಾವುದೇ ವಿಷಯದ ಬಗ್ಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ಮತ್ತು ಕರ್ನಾಟಕ ಆರ್ಥಿಕ ಸಂಹಿತೆಯ ಉಪಬಂಧಗಳು ಮತ್ತು ಸೇವಾ/ ಆರ್ಥಿಕ ವಿಷಯಗಳನ್ನು ನಿಯಂತ್ರಿಸಿ ಸರ್ಕಾರ ಆಗಿಂದಾಗ್ಗೆ ಹೊರಡಿಸುವ ನಿಯಮಗಳು/ಆದೇಶಗಳು/ಸುತ್ತೋಲೆಗಳು ಅನ್ವಯವಾಗುವುದು ಮುಂದುವರೆಯುತ್ತವೆ.

25. ಹೆಚ್.ಆರ್.ಎಂ.ಎಸ್ ಗೆ ಒಳಪಡುವ ಅನುದಾನಿತ ಶಿಕ್ಷಣ ಸಂಸ್ಥೆಗಳ ಡಿಡಿಓಗಳಿಗೂ ಸಹ ಈ ಆದೇಶಗಳು ಅನ್ವಯಿಸುತ್ತವೆ.

26. ಇತರೆ ಯಾವುದೇ ಗಣನೀಯ ಬದಲಾವಣೆಗಳನ್ನು ಹೆಚ್.ಆರ್.ಎಂ.ಎಸ್ ನಲ್ಲಿ ಮಾಡಿದಲ್ಲಿ ಕಾಲಕಾಲಕ್ಕೆ ಹೊರಡಿಸಲಾಗುವ ಆದೇಶಗಳಿಂದ ಆ ಬದಲಾವಣೆಗಳನ್ನು ಕ್ರಮಬದ್ಧಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ವೀಣಾ**
ಪೀಠಾಧಿಕಾರಿ-1
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಇ-ಆಡಳಿತ)

# ವಿಶೇಷ ರಾಜ್ಯ ಪತ್ರಿಕೆ


| ಭಾಗ – I | ಬೆಂಗಳೂರು, ಮಂಗಳವಾರ, ಏಪ್ರಿಲ್ ೧೫, ೨೦೧೪ (ಚೈತ್ರ ೨೫, ಶಕ ವರ್ಷ ೧೯೩೬) | ನಂ. ೨೬೬ |
|---|---|---|
| Part – I | Bangalore, Tuesday, April 15, 2014 (Chaithra 25, Shaka Varsha 1936) | No. 266 |


## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಕೆ. ತಿಮ್ಮಪ್ಪ, ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಾಮರಾಜನಗರ ಇವರ ವಿರುದ್ಧ ಮಾನ್ಯ ಲೋಕಾಯುಕ್ತರ ವರದಿ– ಶಿಸ್ತು ಕ್ರಮ ಕೈಗೊಳ್ಳುವ ಕುರಿತು

**ಓದಲಾಗಿದೆ :**

1. ಆಯುಕ್ತರು ಮತ್ತು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಗಭೂಇ / ಅ–3 / 2005–06, ದಿನಾಂಕ: 17.09.2005
2. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್‌ಓಕೆ / ಐಎನ್‌ವಿ(ಜಿ) / ಎಂ–16 / ಸಿಆರ್–6 / 2005 / ಮೈಸೂರು ದಿನಾಂಕ:01.10.2005
3. ಸರ್ಕಾರದ ಆದೇಶ ಸಂಖ್ಯೆ:ಸಿಐ 92 ಎಂಜಿಎಸ್ 2005, ದಿನಾಂಕ:09.11.2005.
4. ಸರ್ಕಾರದ ಆದೇಶ ಸಂಖ್ಯೆ:ಸಿಐ 92 ಎಂಜಿಎಸ್ 2005, ದಿನಾಂಕ:03.8.2006.
5. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್ / ತನಿಖೆ / ಪೂವಿ / ಎಂ–16 / ಪ್ರಸಂ–6 / 2005 / ಮೈಸೂರು ದಿನಾಂಕ: 12.07.2006
6. ಸರ್ಕಾರದ ಆದೇಶ ಸಂಖ್ಯೆ:ಸಿಐ 92 ಎಂಜಿಎಸ್ 2005, ದಿನಾಂಕ:31.10.2006
7. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್ / ಐಎನ್‌ವಿ(ಜಿ) / ಎಂ–16 / ಸಿಆರ್–6 / 2005 / ಮೈಸೂರು ದಿನಾಂಕ: 21.12.2011
8. ಉಪ ನಿಬಂಧಕರು, ವಿಚಾರಣೆಗಳು–4, ಕರ್ನಾಟಕ ಲೋಕಾಯುಕ್ತ, ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: Copmt/Uplok/Mys-254/2007/DRE-4, ದಿನಾಂಕ:30.07.2008
9. ಸರ್ಕಾರದ ಆದೇಶ ಸಂಖ್ಯೆ:ಸಿಐ 92 ಎಂಜಿಎಸ್ 2005, ದಿನಾಂಕ:01.9.2008

10. ಮಾನ್ಯ ಉಪ ಲೋಕಾಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ:Lok/ARE-3/ Enq-31/2008-09, ದಿನಾಂಕ:06.02.2012
11. ಸರ್ಕಾರದ 2ನೇ ಕಾರಣ ಕೇಳುವ ನೋಟೀಸು ಸಂಖ್ಯೆ:ಸಿಐ 51 ಎಂಜಿಎಸ್ 2012, ದಿನಾಂಕ:25.04.2013
12. ಶ್ರೀ ಕೆ. ತಿಮ್ಮಪ್ಪ, ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಲಿಖಿತ ಹೇಳಿಕೆ ದಿನಾಂಕ:22.06.2013

**ಪ್ರಸ್ತಾವನೆ:-**

ಶ್ರೀ ಕೆ.ತಿಮ್ಮಪ್ಪ, ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ರಾಮನಗರ ಇವರು ಈ ಹಿಂದೆ ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಈ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಶ್ರೀ ನಜೀರ್ ಅಹಮ್ಮದ್, ಮಾಲೀಕರು, ಎ.ಎನ್.ಎಫ್.ಗ್ರಾನೈಟ್ಸ್ ಕಂಪನಿ, ಚಾಮರಾಜನಗರ ರವರಿಗೆ ಸಂಬಂಧಿಸಿದ ಚಾಮರಾಜನಗರ ತಾಲ್ಲೂಕು ಕೊತ್ತಲವಾಡಿ ಗ್ರಾಮದ ಸರ್ವೆ ನಂ. 247 ರಲ್ಲಿ ಗಣಿ ಗುತ್ತಿಗೆ ಪ್ರದೇಶದಿಂದ ಖನಿಜ ಸಾಗಾಣಿಕೆ ಮಾಡಲು ಇವರಿಂದ ಅಕ್ರಮ ಸಂಭಾವನೆ ರೂ.20,000/- ಗಳನ್ನು ಪಡೆಯುವಾಗ ದಿನಾಂಕ:13.09.2005 ರಂದು ಕರ್ನಾಟಕ ಲೋಕಾಯುಕ್ತರ ಬಲೆಗೆ ಸಿಕ್ಕಿದ್ದು ಈ ಬಗ್ಗೆ ಮೈಸೂರು ಲೋಕಾಯುಕ್ತ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ:06/2055 ರಲ್ಲಿ ಲಂಚ ನಿರೋಧ ಕಾಯ್ದೆ 1988ರ ಕಲಂ 7,13(1)(ಡಿ) ರೆ/ವಿ 13(2) ರಡಿ ಪ್ರಕರಣ ದಾಖಲಿಸಿ ಅವರನ್ನು ದಸ್ತಗಿರಿ ಮಾಡಿ ದಿನಾಂಕ:14.09.2005 ರಂದು ಜಾಮೀನು ಮೇಲೆ ಬಿಡುಗಡೆ ಮಾಡಿ ತನಿಖೆ ಕೈಗೊಂಡಿರುವುದಾಗಿ ಇವರ ವಿರುದ್ಧ ವಿಚಾರಣೆಯನ್ನು ಕಾಯ್ದಿರಿಸಿ ಸೇವೆಯಿಂದ ಅಮಾನತ್ತುಗೊಳಿಸುವಂತೆ ಮೇಲೆ(1) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು ಮತ್ತು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಶ್ರೀ ಕೆ. ತಿಮ್ಮಪ್ಪ, ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಾಮರಾಜನಗರ ಇವರ ವಿರುದ್ಧ ಮೇಲಿನ ಭ್ರಷ್ಟಾಚಾರದ ಆರೋಪನೆ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಪ್ರಕರಣದ ಸುಗಮ ತನಿಖೆಗೆ ಹಸ್ತಕ್ಷೇಪ ಮಾಡುವ ಸಾಧ್ಯತೆಗಳಿರುವುದರಿಂದ ಅವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವಂತೆ ಮೇಲೆ(2) ರಲ್ಲಿ ಓದಲಾದ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಇವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಮೇಲೆ(3) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಅಧಿಕಾರಿಯವನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ತದನಂತರ ಮೇಲೆ (4)ರಲ್ಲಿ ಓದಲಾದ ಆದೇಶದಲ್ಲಿ ಅಮಾನತ್ತು ತೆರವುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸಲಾಗಿತ್ತು.

ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಕೆ. ತಿಮ್ಮಪ್ಪ ಉಪ ನಿರ್ದೇಶಕರು ಇವರ ವಿರುದ್ಧ ದಾಖಲಾಗಿರುವ ಟ್ರ್ಯಾಪ್ ಪ್ರಕರಣದಲ್ಲಿ ಅಭಿಯೋಜನೆ ಮಂಜೂರಾತಿ ನೀಡುವಂತೆ ಕೋರಿದ್ದು, ಅದರಂತೆ ಮೇಲೆ(6) ರಲ್ಲಿ ಓದಲಾದ ಆದೇಶದಲ್ಲಿ ಸದರಿಯವರು ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಮಂಜೂರಾತಿ ನೀಡಲಾಗಿತ್ತು.

ಶ್ರೀ ಕೆ. ತಿಮ್ಮಪ್ಪ, ಉಪ ನಿರ್ದೇಶಕರು ಇವರ ವಿರುದ್ಧ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಮೈಸೂರು ಇಲ್ಲಿ ವಿಶೇಷ ಪ್ರಕರಣ ಸಂಖ್ಯೆ:20/2007 ರಲ್ಲಿ ಮಾನ್ಯ ನ್ಯಾಯಾಲಯವು ದಿನಾಂಕ:25.11.2011 ರಂದು ಲಂಚ ನಿರೋಧಕ ಕಾಯ್ದೆ 1988ರ ಕಲಂ 7 ರಡಿ ಒಂದು ವರ್ಷ ಸಾದಾ ಸಜೆ ಹಾಗೂ ರೂ. 10000.00 ದಂಡ ಮತ್ತು ದಂಡ ಕಟ್ಟಲು ತಪ್ಪಿದಲ್ಲಿ 3 ತಿಂಗಳ ಸಾದಾ ಸಜೆ ಹಾಗೂ ಕಲಂ 13 (1)(ಡಿ) ಸಹವಚನ 13(2) ರಡಿ 3 ವರ್ಷ ಸಾದಾ ಸಜೆ ಮತ್ತು ರೂ. 15,000-00 ದಂಡ, ದಂಡ ಕಟ್ಟಲು ತಪ್ಪಿದಲ್ಲಿ 6 ತಿಂಗಳ ಸಾದಾ ಸೆರೆಮನೆ ಶಿಕ್ಷೆ ಅನುಭವಿಸುವಂತೆ ತೀರ್ಪು ನೀಡಿರುವುದಾಗಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (7) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ವರದಿ ಮಾಡಿರುತ್ತಾರೆ.

ಈ ಮಧ್ಯೆ ಶ್ರೀ ಕೆ. ತಿಮ್ಮಪ್ಪ, ಉಪ ನಿರ್ದೇಶಕರು, ಇವರು ಮಾನ್ಯ ಲೋಕಾಯುಕ್ತ ಪ್ರಧಾನ ಸೆಷನ್ಸ್ ನ್ಯಾಯಾಲಯ ಇಲ್ಲಿ ದಾಖಲಾದ ವಿಶೇಷ ಪ್ರಕರಣ ಸಂಖ್ಯೆ:20/2007 ರಲ್ಲಿ ದಿನಾಂಕ:21.11.2011 ರಂದು ನೀಡಲಾದ ತೀರ್ಪನ್ನು ಪ್ರಶ್ನಿಸಿ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ:1184/2011 ನ್ನು ದಾಖಲಿಸಿರುತ್ತಾರೆ. ಈ ಸಂಬಂಧ ಮಾನ್ಯ ರಾಜ್ಯ ಉಚ್ಚ ನ್ಯಾಯಾಲಯವು ದಿನಾಂಕ:24.11.2011 ರಂದು ನೀಡಿದ ತೀರ್ಪಿನಲ್ಲಿ ಕೆಳ ನ್ಯಾಯಾಲಯವು ದಿನಾಂಕ:21.11.2011 ರಂದು ನೀಡಿದ ತೀರ್ಪಿನ ಶಿಕ್ಷೆಯನ್ನು ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಉಪ ನಿಬಂಧಕರು, ವಿಚಾರಣೆಗಳು-4 ಕರ್ನಾಟಕ ಲೋಕಾಯುಕ್ತ ಇವರು ಮೇಲೆ (8) ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಕೆ.ತಿಮ್ಮಪ್ಪ, ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಾಮರಾಜನಗರ ಇವರ ವಿರುದ್ದ ಶ್ರೀ ನಸೀಬ್ ಅಹ್ಮದ್ ಇವರು ಸಲ್ಲಿಸಿದ ದೂರು ಆದಾರದ ಮೇರೆಗೆ ಲೋಕಾಯುಕ್ತರು ಕರ್ನಾಟಕ ಲೋಕಾಯುಕ್ತ ಕಾಯ್ದೆ ಸೆಕ್ಷನ್ 7(2)ರ ಅಡಿ ಸ್ವಯಂ ವಿಚಾರಣೆ ನಡೆಸಿ ತನಿಖಾ ವರದಿಯನ್ನು ಸದರಿ ಕಾಯ್ದೆಯ ಸೆಕ್ಷನ್ 12(3) ರಡಿ ಸೆಕ್ಷಮ ಪ್ರಾಧಿಕಾರಕ್ಕೆ ವರದಿ ಮಾಡಿದ್ದು, ಇವರ ವಿರುದ್ದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ-14ಎ ರಡಿ ಕಠಿಣ ದಂಡನೆ ವಿಧಿಸಲು ಮುಂದಿನ ವಿಚಾರಣೆಗಾಗಿ ಲೋಕಾಯುಕ್ತಕ್ಕೆ ವಹಿಸುವಂತೆ ಕೋರಿರುತ್ತಾರೆ.

ಕ್ರಿಮಿನಲ್ ಪ್ರಕರಣಗಳಿಗೆ ಸಮಾನಾಂತರವಾಗಿ ಇಲಾಖಾ ಶಿಸ್ತು ಕ್ರಮ ಜರುಗಿಸಲು ಸರ್ಕಾರಕ್ಕೆ ಅವಕಾಶವಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ-14ಎ ರಡಿ ಈ ಪ್ರಸ್ತಾವನೆ ಪರಿಶೀಲಿಸಿ ಸದರಿ ನಿಯಮಗಳಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ. ತಿಮ್ಮಪ್ಪ, ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ,ಇವರ ವಿರುದ್ಧದ ಆರೋಪಗಳ ಬಗ್ಗೆ ಸತ್ಯಾಸತ್ಯತೆ ಕಂಡುಕೊಳ್ಳಲು ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 14(ಎ) ರಡಿ ಮೇಲೆ(9)ರಲ್ಲಿ ಓದಲಾದ ಆದೇಶದಲ್ಲಿ ಮಾನ್ಯ ಲೋಕಾಯುಕ್ತಕ್ಕೆ ವಹಿಸಲಾಗಿತ್ತು.

ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ(10) ರಲ್ಲಿ ಸಲ್ಲಿಸಲಾದ ವರದಿಯಲ್ಲಿ ಶ್ರೀ ಕೆ. ತಿಮ್ಮಪ್ಪ ಉಪ ನಿರ್ದೇಶಕರು, ಇವರ ವಿರುದ್ಧ ಇಲಾಖಾ ವಿಚಾರಣಾಧಿಕಾರಿಗಳಾದ ಅಪರ ನಿಬಂಧಕರು, ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ ಇವರು ಸಲ್ಲಿಸಿದ ಇಲಾಖಾ ವಿಚಾರಣಾ ವರದಿಯಲ್ಲಿ ಆರೋಪಗಳು ದೃಢಪಟ್ಟಿರುವುದರಿಂದ ಈ ಕೆಳಗಿನಂತೆ ಶಿಫಾರಸ್ಸು ಮಾಡಿರುತ್ತಾರೆ.

I am of the opinion that, the penalty provided under Rule 8(Viii) of K.C.S(CC&A) Rules 1957, I.e. dismissal of the DGO Sri. K. Thimmappa from service would be an appropriate penalty. Accordingly I recommend for imposition of the said penalty on the DGO Sri. K. Thimmappa, by Dy. Director, Mines and Geology Department, Chamarajanagar. This punishment in my view would meet the ends of justice.

ಈ ಬಗ್ಗೆ ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸಿನ ಪ್ರತಿ ಹಾಗೂ ಇಲಾಖಾ ವಿಚಾರಣೆ ವರದಿಯನ್ನು 2ನೇ ಕಾರಣ ಕೇಳುವ ನೋಟೀಸಿನ ಮೂಲಕ ಶ್ರೀ ಕೆ. ತಿಮ್ಮಪ್ಪ ಉಪ ನಿರ್ದೇಶಕರು, ಇವರಿಗೆ ಮೇಲೆ(11) ರಲ್ಲಿ ಓದಲಾದ ಪತ್ರದಲ್ಲಿ ಜಾರಿ ಮಾಡಿ ಅವರ ಲಿಖಿತ ಸಮಜಾಯಿಷಿ ಹೇಳಿಕೆಗಳನ್ನು

ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಂತೆ ಸದರಿಯವರು ಮೇಲೆ (12) ರಲ್ಲಿ ಓದಲಾದ ದಿನಾಂಕ:22.06.2013ರ ಪತ್ರದಲ್ಲಿ ತಮ್ಮ ಲಿಖಿತ ಸಮಜಾಯಿಷಿ ಹೇಳಿಕೆಗಳನ್ನು ನೀಡಿ ಸಾಕ್ಷಿಗಳು ನೀಡುವ ಹೇಳಿಕೆಗಳು ತನಿಖಾಧಿಕಾರಿಯ ವರದಿಯು ಒಂದಕ್ಕೊಂದು ತಾಳೆಯಾಗುವುದಿಲ್ಲವೆಂದು ಈ ಟ್ರ್ಯಾಪ್ ಪ್ರಕರಣವು ಕಾನೂನು ಬಾಹಿರವಾಗಿ ದುರುದ್ದೇಶದಿಂದ ಕೂಡಿರುವುದಾಗಿ ಹಾಗೂ ಆರೋಪಗಳನ್ನು ತನಿಖಾಧಿಕಾರಿಗಳು ರುಜುವಾತುಪಡಿಸಿಲ್ಲವೆಂದು ಹಾಗೂ ಪ್ರಥಮ ವರ್ತಮಾನ ವರದಿಯನ್ನು ಸಲ್ಲಿಸುವುದಕ್ಕೆ ಮುಂಚೆಯೇ ಟ್ರ್ಯಾಪ್ ಮಾಡಿರುವುದು ಕಾನೂನು ಬಾಹಿರವೆಂದು ಸ್ಥಳ ಪಂಚನಾಮೆ ಮಾಡಿಲ್ಲವೆಂದು ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಅಪಾದಿತ ಅಧಿಕಾರಿಯವರ ಮೇಲೆ ಆಗಿರುವ ಇಲಾಖಾ ವಿಚಾರಣೆ ವರದಿಯ ಮೇರೆಗೆ ಅಪಾದಿತ ಅಧಿಕಾರಿಯವರು ನೀಡಿರುವ ಲಿಖಿತ ಸಮಜಾಯಿಷಿಯಲ್ಲಿನ ಅಂಶಗಳನ್ನು ಒಪ್ಪಲು ಸಾಧ್ಯವಿಲ್ಲದ ಕಾರಣ ಹಾಗೂ ಶ್ರೀ ಕೆ. ತಿಮ್ಮಪ್ಪ, ಉಪ ನಿರ್ದೇಶಕರು ಇವರ ವಿರುದ್ಧ ಇರುವ ಆರೋಪಗಳು ಗಂಬೀರ ಸ್ವರೂಪದಿಂದ ಕೂಡಿದ್ದು ಹಾಗೂ ಆರೋಪಗಳು ಸಾಬೀತಾಗಿರುವುದರಿಂದ ಸರ್ಕಾರವು ಸದರಿ ಅಧಿಕಾರಿಯವರಿಗೆ ಕಠಿಣ ಶಿಕ್ಷೆಯನ್ನು ವಿಧಿಸಲು ತೀರ್ಮಾನಿಸಿದೆ.

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಾನ್ಯ ಉಪ ಲೋಕಾಯುಕ್ತರು ನೀಡಿರುವ ಶಿಫಾರಸ್ಸನ್ನು ಒಪ್ಪಿ ಅಪಾಧಿತ ಅಧಿಕಾರಿಯಾದ ಶ್ರೀ ಕೆ. ತಿಮ್ಮಪ್ಪ, ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ರಾಮನಗರ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 51 ಎಂಜಿಎಸ್ 2012, ಬೆಂಗಳೂರು, ದಿನಾಂಕ: 15.04.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಕೆ.ತಿಮ್ಮಪ್ಪ, ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ರಾಮನಗರ ಇವರು ಈ ಹಿಂದೆ ಉಪ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಈ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ನಜೀರ್ ಅಹಮ್ಮದ್ ಮಾಲೀಕರು, ಎ.ಎಸ್.ಎಫ್.ಗ್ರಾನೈಟ್ಸ್ ಕಂಪನಿ, ಚಾಮರಾಜನಗರ ರವರಿಗೆ ಸಂಬಂಧಿಸಿದ ಚಾಮರಾಜನಗರ ತಾಲ್ಲೂಕು ಕೊತ್ತಲವಾಡಿ ಗ್ರಾಮದ ಸರ್ವೆ ನಂ. 247 ರಲ್ಲಿ ಗಣಿ ಗುತ್ತಿಗೆ ಪ್ರದೇಶದಿಂದ ಖನಿಜ ಸಾಗಾಣಿಕೆ ಮಾಡಲು ಇವರಿಂದ ಅಕ್ರಮ ಸಂಭಾವನೆ ರೂ.20,000/– ಗಳನ್ನು ಪಡೆಯುವಾಗ ಮಾನ್ಯ ಲೋಕಾಯುಕ್ತಕ್ಕೆ ಸಿಕ್ಕಿಬಿದ್ದಿದ್ದು ಇವರ ವಿರುದ್ಧ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ದೃಢಪಟ್ಟಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(Viii) ರನ್ವಯ ಸದರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ವೆಂಕಟೇಶ್**
ಪೀಠಾಧಿಕಾರಿ(ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – I | ಬೆಂಗಳೂರು, ಗುರುವಾರ, ಏಪ್ರಿಲ್ ೧೦, ೨೦೧೪ (ಚೈತ್ರ ೨೦, ಶಕ ವರ್ಷ ೧೯೩೬) | ನಂ. ೨೬೪ |
|---|---|---|
| **Part – I** | **Bangalore, Thursday, April 10, 2014 (Chaithra 20, Shaka Varsha 1936)** | **No. 264** |

## PERSONNEL AND ADMINISTRATIVE REFORMS SECRETARIAT

### OFFICIAL MEMORANDUM

### No. DPAR 33 HKP 2014, Bangalore, dated: 10th APRIL, 2014

**Subject**: Balancing of roster points and operation of roster consequent to the formation of local cadre, allotment and transfer of local persons to the local cadre in implementing Article 371(J) of the Constitution of India – regarding.

The Karnataka Public Employment (Reservation in Appointments for Hyderabad-Karnataka Region) Order, 2013, provides for the formation of local cadre, allotment and transfer of persons from parent cadre to the local cadre. Detailed operational guidelines are issued in the Karnataka Public Employment (Reservation in Appointments for Hyderabad-Karnataka Region) (Organization of Local Cadre, Allotment and Transfer of Persons) Rules, 2013 as regards the procedure to be followed in this regard.

Consequent to the formation of local cadre, the appointing/cadre controlling authorities are required to identify the local persons from among the incumbents working in the parent cadre. In doing so, the entry in the service register before 01.01.2013 as to their home town or place falling within the local area shall be considered to be the conclusive proof of their domicile. Such of those who qualify for being classified as local persons shall be given an opportunity to opt for being allotted to the local cadre and the lien of such of the incumbents opting for the local cadre, shall be fixed in the local cadre and as such, they move to the local cadre along with their seniority and roster points. This would automatically result in imbalance in reservation, both in the local and residual parent cadres. There would be some representation of roster points in the local cadre, as also some representation of roster points in the residual parent cadres. Hence, there is a dire need to balance the roster points in the immediate process of filling up of the vacant posts either by direct recruitment or by way of promotion in both the cadres. A question arises as to whether to start the roster

cycle in both the cadres commencing from the first roster point or otherwise in view of the fact that, the local cadre and the residual parent cadre are to be considered as two separate units for the purpose of direct recruitment, promotion, seniority and operation of roster points. In view of the fact, that, there would be some representation of roster points consequent to the allotment of local persons opting for the local cadre from among the incumbents, if the roster commencing from first point is operated, there would be duplication of some of the roster points resulting in over representation. As such, there is a felt need to balance the roster before it is operated on continuous basis. The missing roster points falling in the roster cycle commencing from the first point till the roster point of the last incumbent allotted to the local cadre shall be identified and action would be initiated by the appointing authorities to fill up such of the missing roster points on the same priority in their immediate attempt to fill up the vacant posts, either by way of direct recruitment or by way of promotions. While identifying the missing roster points, the appointing/cadre controlling authorities shall separately identify the missing roster points in respect of direct recruitment and promotional categories. A typical example of identifying the missing roster points, roster points replacing the missing points in the roster cycle figuring in the local cadre consequent upon the allotment of incumbents to the local cadre is as per the attached annexure.

The appointing/cadre controlling authorities shall operate the roster commencing and ending with 1-100 in respect of direct recruitment posts, in accordance with the details contained in G.O. No. ಸಿಆಸುಇ 08 ಸೆಹಿಮ 95, dated 20.06.1995 and G.O. No. ಸಿಆಸುಇ 97 ಸೆನೆನಿ 2002, dated 22.11.2002 while in respect of promotional posts, the roster commencing and ending with 1-33 shall be operated as detailed in G.O. No. DPAR 22 SBC 79, dated 30.08.1979. The roster points represented consequent to the allotment of the incumbents to the local cadre would comprise of the roster points of both direct recruitment cycle as also the promotional cycles giving the break up of further reservations as detailed in G.O. No. ಸಿಆಸುಇ 97 ಸೆನೆನಿ 2002, dated 22.11.2002 and as such, the missing roster points in both the cycles need to be taken into consideration by segregating direct recruitment category and promotional categories from among the allotment made to the local cadre to arrive at the consolidated missing roster points. The missing roster points so arrived at shall be filled in the immediate appointment to balance the roster. In addition, the roster points not figuring in the roster cycle represented in the local cadre consequent to the allotment shall be setoff/adjusted against the respective roster points while operating the roster subsequently.

The appointing/cadre controlling authorities while taking a view on the option exercised by the incumbents opting for the local cadre, shall accept the option based on the seniority so as to enable to fix the lien in the respective cadres. In the event of the number of local persons opting for the local cadre exceeding the available number of posts/vacancies in the local cadre, the options so exercised shall be accepted based on the seniority to the extent of the available number of posts and the options in respect of other employees shall either be rejected on the grounds that the local cadre is full or the second priority indicated therein be considered (in the case of district, region and State level local cadres) wherever applicable. The option once exercised opting for the local cadre or otherwise is final and is irrevocable. In the event of local persons not exercising their options within the time frame indicated by the appointing/cadre controlling authorities, it would be presumed that the local person is not interested to join the local cadre and as such would be allotted to residual parent cadre.

It is further clarified that in the event of persons belonging to reserved category, after having selected under the general category on the basis of merit, they would continue to carry the unreserved (General Merit) roster point and in the event of their promotion to the next higher cadre, they would be considered against the reserved roster point applicable to them.

The appointing/cadre controlling authorities shall ensure to fill in the available vacancies in the process of immediate filling up of vacancies by such of the local persons falling under the same missing roster points. In the event of non availability of qualified persons from the feeding cadres falling under the respective categories with in the local cadre, such of the unfilled vacancies are carried forward as backlog vacancies till the next appointment, after which it would be treated as unreserved and filled accordingly from among the residual parent cadre of the local cadre itself. Consequent to the filling up of the missing roster points, the roster in the local cadre as also in the residual parent cadres would be balanced and the appointing/cadre controlling authorities shall operate the roster from the next point immediately falling below the last roster point of the last person allotted to the local cadre as figuring in the roster cycle. The appointing/cadre controlling authorities shall follow the instructions contained in the G.O's issued by DPAR (Service Rules) from time to time as regards the classification of the posts under vertical and horizontal reservations.

The appointing authorities shall comply to the instruction as above while allotting the local persons to the local or residual parent cadres based on their options, initiate action to balance the roster in the next immediate appointment and operate the standard applicable roster cycle thereon continuously.

**K.L. LOKANATHA**
Joint Secretary to Government
(Hyderabad-Karnataka Special Cell)
DPAR

**ANNEXURE TO OFFICIAL MEMORANDUM NO. DPAR 33 HKP 2014, DATED: 04.04.2014**

**(1) Name of the Service: Secretariat Service**
**(2) Designation of the post : Typist**
**(3) Cadre Strength as per C&R Rules : 243**
**(4) State Level Reservation Envisaged under Article 371(J) @ 8% : 19**
**(5) Mode of filling up of Posts : a. By Direct Recruitment 90%**
**b. By Promotion 10%**
**(6) Feeding Cadre : Candidates qualifying the eligibility criteria from the cadre of Dalayats**
**(7) No. of Eligible Candidates among the Incumbents Exercising the Option opting for the Local Cadre : a. Promotion – Nil**
**b. Direct Recruitment – 15**
**c. Total - 15**
**(8) Clear Vacancy Available in the Local Cadre after Allotment : a. Promotion – 2 Posts**
**b. Direct Recruitment – 2 Posts**
**c. Total – 4 Posts**

| Cadre Strength as per C&R Rules | Posts reserved for Local Persons at the rate of 8% as per Article 371(J) of the Constitution | | | Cadre Strength after carving out the reserved posts left over in the Residual Parent Cadre | | | No. of Incumbents opting for the Local Cadre | | | Clear Vacancy available in the Local Cadre after accepting/rejecting the option | | | Details of the incumbents allotted to the Local Cadre in the Order of Seniority indicating roster category | Roster points as per the roster cycle | | Roster points represented consequent to the allotment of incumbents to the local cadre | | Missing roster points to be considered while filling up of the vacant post to balance the roster | Roster points replacing the missing points in the roster cycle |
|---|---|---|---|---|---|---|---|---|---|---|---|---|---|---|---|---|---|---|---|
| | PR | DR | TOTAL | PR | DR | TOTAL | PR | DR | TOTAL | PR | DR | TOTAL | Smt/Sri | PR (1-33) | DR (1-100) | PR | DR | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 |
| 243 | 02 | 17 | 19 | 22 | 202 | 224 | - | 15 | 15 | 02 | 02 | 04 | Srikanth (DR) (05) (SC) | 1(SC) | 1(SC) | - | SC | - | - |
| | | | | | | | | | | | | | Jagadish (DR) (13) (GM) | 2(ST) | 2(GM) | - | GM | - | - |
| | | | | | | | | | | | | | Sunil Kumar (DR) (24) (GM) | 3(UR) | 3(ST) | - | GM | ST | GM |
| | | | | | | | | | | | | | Padmasri (DR) (31) (GM) | 4(UR) | 4(GM) | - | GM | - | - |
| | | | | | | | | | | | | | Annappa (DR) (34) (GM/PH) | 5(UR) | 5(I) | - | GM(PH) | I | GM(PH) |
| | | | | | | | | | | | | | Lakshmi Pattar (DR) (13) (GM)* | 6(UR) | 6(GM) | - | GM | - | - |
| | | | | | | | | | | | | | Roopa D. Rao (DR) (31) (GM)* | | | - | GM | 2A | GM |
| | | | | | | | | | | | | | Manjunath (DR) (74) (GM/R)* | 7(SC) | 7(2A) | - | GM(R) | - | - |
| | | | | | | | | | | | | | Basavantharaya (DR) (86) (GM/R)* | 8(UR) | 8(GM) | - | GM | SC | GM |
| | | | | | | | | | | | | | Siddanna Natikar (DR) (110) (GM/R)* | 9(UR) | 9(SC) | - | GM(R) | - | - |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|
| | | | | | | | | | | | | | Raja Ahmed (DR) (114) (2B/R)* | 10(UR) | 10(GM) | - | 2B(R) | - | - |
| | | | | | | | | | | | | | Mohammad Pasha (DR) (126) (GM/PDP)* | 11(UR) | 11(2B) | - | GM(PDP) | - | - |
| | | | | | | | | | | | | | Jaya Bheema (DR) (136) (GM/PDP)* | 12(UR) | 12(GM) | - | GM(PDP) | 2A | GM(PDP) |
| | | | | | | | | | | | | | Monika P.S (DR) (143) (2A/PDP)* | | | - | 2A(PDP) | GM | 2A(PDP) |
| | | | | | | | | | | | | | Shivasharanappa (DR) (145) (3B/PDP)* | 13(UR) | 13(2A) | - | 3B(PDP) | SC | 3B(PDP) |
| | | | | | | | | | | | | | | 14(SC) | 14(GM) | | | | |
| | | | | | | | | | | | | | | 15(UR) | 15(SC) | | | | |
| | | | | | | | | | | | | | | 16(UR)<br>17(UR)<br>18(UR)<br>19(UR)<br>20(UR)<br>21(SC)<br>.<br>.<br>.<br>.<br>27(SC)<br>.<br>.<br>.<br>.<br>33(UR) | 16(GM)<br>17(3A)<br>18(GM)<br>19(3B)<br>20(GM)<br>.<br>.<br>.<br>.<br>100(GM) | | | | |
| Details of the missing roster points to be made good to balance the roster in the order of priority. | | | | | | | | | | | | | | | | | | ST, I, SC, 2A, SC | |
| In the immediate attempt to fill in the available vacancies in the local cadre, the missing roster points shown as above are to be filled to begin with so as to balance the roster and thereon operated from roster point no. 16 onwards and the roster points replacing the missing points in the roster cycle (22, 24, 26, 43) already represented in the allotment from 1-15 (GM, GM, GM (PDP), 3B(PDP)) shall be setoff against the respective roster points while operating the roster subsequently. | | | | | | | | | | | | | | | | | | | |

* Candidates recruited after 01.01.2013 qualifying the local candidate criteria.

**K.L. LOKANATHA**
Joint Secretary to Government
(Hyderabad-Karnataka Special Cell), DPAR

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

